—ಗೆ

ನನ್ನೆದೆಯೊಳಡಗಿದ್ದ ಕಿಡಿಯಿದನು ಮೊದಲು
ನಿನ್ನೊಲುಮೆಯೆಲರುರುಹಿ ಬಯಲಿಗೆಳೆದಿರಲು,
ಮುನ್ನಿಸಿದರಲಿ ಕುಂದನೆಂದಾಡಲೇಕೆ?—
ನಿನ್ನ ಬೆಳಕನು ನೀನೆ ಜರೆದಿಕ್ಕಲಾರೆ!

# ಅರಿಕೆ

ಪ್ರೇಮಗೀತಗಳನ್ನು ಬರೆಯುವುದೂ, ಬರೆದ ಮೇಲೆ ಬೆಳಕಿಗೆ ತರುವುದೂ—ಎರಡೂ ಸಾಹಸಕಾರ್ಯಗಳೇ. ಈ ಬಗೆಯ ಕವನಗಳಲ್ಲಿ ಔಚಿತ್ಯದ ಹದ ಎಲ್ಲಿ ಮೀರುತ್ತದೆ, ರಸ ಎಲ್ಲಿ ಹಸಗೆಟ್ಟು ಹಾಸ್ಯಕರವಾಗುತ್ತದೆ ಎಂದು ಅರಿಯುವುದು ಲೇಖಕನಿಗಂತೂ ಬಲು ಕಷ್ಟ. ಆದರೂ ಭಾವವು ಪ್ರೇರಿಸಿದಾಗ ಈ ವಿಚಾರಕ್ಕೆ ಅಷ್ಟು ಮನಸ್ಸುಕೊಡದೆ, ನಾಲ್ಕು ಚರಣಗಳನ್ನು ಆಗಾಗ ಕೂಡಿಸಿದ್ದಾಯಿತು. ಅವುಗಳನ್ನು ಪ್ರಕಟಿಸುವುದಕ್ಕೆ ಮಾತ್ರ ನನ್ನ ಆಪ್ತಮಿತ್ರರು ಕೆಲವರ ಒಪ್ಪಿಗೆಯೂ ಉತ್ತೇಜನವೂ ದೊರೆಯದಿದ್ದರೆ ಧೈರ್ಯ ಬರುತ್ತಿರಲಿಲ್ಲ. ಈಗ ಕೂಡ, ಈ ಚಿಕ್ಕ ಗೀತಾವಳಿಯನ್ನು ಸ್ವಲ್ಪ ಅಳುಕಿನಿಂದಲೇ ಸಹೃದಯರ ಮುಂದೆ ಇರಿಸಿದ್ದೇನೆ.

ಈ ಕವನಗಳು ಒಂದು ಕಾಲದಲ್ಲಿ, ಒಂದು ಮನಸ್ಸಿನಲ್ಲಿ ಬರೆದವುಗಳಲ್ಲ ; ಕಡೆಗೆ ಒಂದೇ ದೃಷ್ಟಿಯಿಂದ ಕೂಡ ಬರೆದವುಗಳಲ್ಲ. ಆದಕಾರಣ ಇವುಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ವಿಷಯಾನುಗುಣವಾಗಿ ಜೋಡಿಸಿದ್ದರೂ ಈ ಸಂಕಲನದಲ್ಲಿ ಒಂದು ಸಾಮರಸ್ಯವು ವಾಚಕರಿಗೆ ತೋರದಿರಬಹುದು ; ಅವರೂ ಅದನ್ನು ನಿರೀಕ್ಷೆಮಾಡದೆ, ಇವೆಲ್ಲವನ್ನೂ ಬಿಡಿ ಕವನಗಳೆಂದೇ ಭಾವಿಸಬೇಕಾಗಿ ಕೋರಿಕೆ.

ಇಲ್ಲಿ ಕೊಟ್ಟಿರುವ ಅನುವಾದಗಳನ್ನು ಕುರಿತು ಎರಡು ಮಾತುಗಳು. ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರರಸವು ಗಾಂಭೀರ್ಯವನ್ನು ಸಾಕಾದಷ್ಟು ಕಾಪಾಡಿಕೊಂಡಿಲ್ಲವೆಂದು ಕೆಲವರು ಆಡಿಕೊಳ್ಳುವುದುಂಟು. ಆದರೆ ಈಗ ನಾವು ಉಚ್ಚರಿಸಲು ನಾಚುವ ಹಲವು ಮಾತುಗಳಿಗೆ ಸಂಸ್ಕೃತದಲ್ಲಿ ಅಶ್ಲೀಲಧ್ವನಿಯಿಲ್ಲ. ಅಲ್ಲದೆ, ಪ್ರೇಮದ ಹೃದಯವನ್ನು ಶುಚಿಯಾದ ವಾಣಿಯಲ್ಲಿ, ವಿಶ್ವಮನೋಹರವಾದ ರೀತಿಯಲ್ಲಿ ಸಂಸ್ಕೃತ

ಕವಿಗಳು ನಿರೂಪಿಸಬಲ್ಲರೆನ್ನುವುದಕ್ಕೆ ಇಲ್ಲಿರುವ ಕೆಲವು ಪದ್ಯಗಳೇ—ನನ್ನ ಅನುವಾದದಲ್ಲಿ ಅವುಗಳ ಮಾಧುರ್ಯಸೌಕುಮಾರ್ಯಗಳು ಕೊಂಚ ಮಟ್ಟಿಗಾದರೂ ಉಳಿದಿದ್ದರೆ—ಸಾಕ್ಷಿಯಾಗಿ ನಿಲ್ಲಬಹುದು. ಈ ಬಿಡಿ ಪದ್ಯಗಳಲ್ಲಿ—'ಮುಕ್ತಕ'ಗಳಲ್ಲಿ—ಒಂದೊಂದೂ ಪೂರ್ಣಕಾವ್ಯ. ಅವಕಾಶವು ಇಷ್ಟು ಕಿರಿದಾಗಿದ್ದರೂ ಅದು ಒಂದು ಸಮಗ್ರಭಾವವನ್ನು ಚಿತ್ರಿಸುತ್ತದೆ. ಅದರ ಸವಿಯನ್ನೆಲ್ಲಾ ಆಸ್ವಾದಿಸಬೇಕಾದರೆ, ಕವಿಯ ಕಲ್ಪನೆಯೊಂದಿಗೆ ನಮ್ಮ ಕಲ್ಪನೆಯನ್ನೂ ಹಾರಬಿಟ್ಟು, ಚಿತ್ರದ ಸುತ್ತಲೂ ಒಂದು ಉಚಿತವಾದ ಆವರಣವನ್ನು ರಚಿಸಿಕೊಂಡು, ಅದರ ಪ್ರಭೆಯನ್ನು ಕವಿಯ ಮಾತುಗಳ ಮೇಲೆ ಬೀರಬೇಕು. ಆಗ ನಮಗೆ ಈ 'ದಂತದ ಮೇಲಿನ ಚಿತ್ರಗೆಲಸ'ದ ಅಪೂರ್ವಸತ್ತ್ವವು ಮನದಟ್ಟಾಗುತ್ತದೆ; ಅಮರುಕನಂಥ ಕವಿಗೆ ಸಂಸ್ಕೃತ ಸಾಹಿತ್ಯದಲ್ಲಿರುವ ಪ್ರಶಸ್ತಿ ಅರ್ಥವಾಗುತ್ತದೆ.

ಮೇಲಿನ ಮಾತುಗಳೇ 'ಗಾಥಾಸಪ್ತಶತಿ'ಯಿಂದ ಆರಿಸಿಕೊಂಡಿರುವ ಪ್ರಾಕೃತ ಪದ್ಯಗಳಿಗೂ—ಅಷ್ಟೇಕೆ, ಗ್ರೀಕ್ ಭಾಷೆಯಿಂದ ತೆಗೆದುಕೊಂಡಿರುವ ಎರಡು ಪದ್ಯಗಳಿಗೂ ಕೂಡ—ಸಮಯೋಚಿತವಾಗಿ ಅನ್ವಯಿಸುತ್ತವೆ. ಈ ಗ್ರೀಕ್ ಪದ್ಯಗಳ ಪರಿಚಯವು ನನಗೆ ಅವುಗಳ ಇಂಗ್ಲಿಷ್ ರೂಪಾಂತರದಲ್ಲಿ ಮಾತ್ರ ಆಗಿದೆಯೆಂದು ಇಲ್ಲಿ ತಿಳಿಸುವುದು ಆವಶ್ಯಕ.

ಈ ಗ್ರಂಥದ ಪ್ರಕಟನೆಯಲ್ಲಿ ನನಗೆ ನೆರವಾಗಿ ಬೆಂಬಲವಾಗಿ ನಿಂತ ಹಿರಿಯರಿಗೂ ಮಿತ್ರರಿಗೂ ನನ್ನ ಕೃತಜ್ಞತೆಯನ್ನು ತುಂಬ ಸಂತೋಷದಿಂದ ಸಲ್ಲಿಸುತ್ತೇನೆ. ಇಲ್ಲಿ ಬಂದಿರುವ ಕವನಗಳಲ್ಲಿ 'ನಡೆದ ಸಂಗತಿ' ಎಂಬುದು 'ಜಯಕರ್ನಾಟಕ'ದಲ್ಲಿಯೂ 'ಹಿಡಿದ ವ್ರತ'ವು 'ಸರಸ್ವತಿ'ಯಲ್ಲಿಯೂ ಈ ಮೊದಲೆ ಪ್ರಕಟವಾಗಿದ್ದುವು. ಈ ಕೃಪೆಗಾಗಿ ಆವೆರಡು ಪತ್ರಿಕೆಗಳ ಸಂಪಾದಕರಿಗೆ ನನ್ನ ವಂದನೆಗಳು.

ತೀ. ನಂ. ಶ್ರೀ.

# ಕವನಗಳ ಕ್ರಮ


ಪುಟ

೧. ಏಕೆ .... .... .... .... ೧

೨. ಪ್ರಥಮ ದರ್ಶನ .... .... .... .... ೨

೩. ಸಂಬಂಧ .... .... .... .... ೪

೪. ಹೂವಿನ ಸರ .... .... .... .... ೬

೫. ಹೊರಡುವಾಗ .... .... .... .... ೯

೬. ಪಶ್ಚಾತ್ತಾಪ .... .... .... .... ೧೦

೭. ಪ್ರಶ್ನೆ-ಉತ್ತರ .... .... .... .... ೧೧

೮. ಅಗಲಿಕೆ .... .... .... .... ೧೨

೯. ನಿರಾಶೆ .... .... .... .... ೧೩

೧೦. ಬಿಸಿಲು ಕುದುರೆ .... .... .... .... ೧೪

೧೧. ಹಿಡಿದ ವ್ರತ .... .... .... .... ೧೫

೧೨. ಉಪೇಕ್ಷಿತೆ .... .... .... .... ೧೮

೧೩. ಸಂಶಯ .... .... .... .... ೧೯

೧೪. ಒಲವೋ ಹಗೆಯೋ .... .... .... ೨೦

೧೫. ಸಮಾಧಾನ .... .... .... .... ೨೧

೧೬. ಏಕೆ ನಲುಗಿತು .... .... .... .... ೨೫

೧೭. ತನಗೆ .... .... .... .... ೨೮

೧೮. ನಡೆದ ಸಂಗತಿ .... .... .... .... ೩೦

೧೯. ಅಂಜಿಕೆ .... .... .... .... ೩೨

೨೦. ಪ್ರೇಮ ಭೈರವ .... .... .... .... ೩೩

ಅನುವಾದ

೨೧. ಸಂಸ್ಕೃತದಿಂದ :

ಪ್ರಸ್ಥಾನ ಕಾಲ .... .... .... ೩೭

ಪಾಂಥ ವನಿತೆ .... .... .... ೩೮

ಅಭಿಸಾರಿಕೆ .... .... .... ೩೯

ಹತಾಶೆ .... .... .... .... ೪೦

ವಿರಹಿ .... .... .... .... ೪೧

ಸಂಕೀರ್ಣ .... .... .... ೪೩

೨೨. ಗಾಥಾಸಪ್ತಶತಿಯಿಂದ .... .... .... ೪೪

೨೩. ಗ್ರೀಕಿನಿಂದ .... .... .... .... ೪೬

೨೪. ಕಣ್ಣು .... .... .... .... ೪೭

೨೫. ಹೆಸರು .... .... .... ... ೪೮

# ಒಲುಮೆ

## ಏಕೆ

ನಿನ್ನ ಕಾಣುತಲೆ ನನ್ನೆದೆಯೇಕೆ ಹಾರುವುದು,
ಹೊಸ ಬಗೆಯ ಸಂತೋಷವೇಕೊಗೆವುದು?
ನಿನ್ನ ಸಂಗದ ಸೌಖ್ಯವೇಕೆ ಮನಸನು ಕುಣಿಸಿ
ಮಿಕ್ಕೆಲ್ಲ ಚಿಂತೆಯನು ಮರೆಯಿಸುವುದು?
ನಿನ್ನ ಮೈ ಸೋಕಿದರೆ ಮಿಂಚು ಹರಿದಂತೇಕೆ
ನನ್ನ ಮೈ ಜುಮ್ಮೆಂದು ಕಂಪಿಸುವುದು?
ನಿನ್ನನಗಲಲು ಬಾಳಿನೊಳಗೇಕೆ ಸವಿಯಿರದು,
ನನ್ನನೇತಕೆ ದುಗುಡ ಸೆರೆಗೊಳುವುದು?

ನಿನ್ನ ಚಿಂತೆಯಲಿಂತು ನಾನೇಕೆ ಮುಳುಗಿರುವೆನು,
ನಿನ್ನ ಮೂರ್ತಿಯನೆದೆಯ ಪೀಠದಲಿ ನಿಲಿಸಿರುವೆನು?
ನಿನ್ನ ಮೋಹದ ಮಾಯೆಯೇಕೆ ಹಗಲಿರುಳೆನ್ನದೆ
ನನ್ನ ಜೀವನಪಥವನೆಡೆಬಿಡದೆ ಕವಿದಿರುವುದು?

# ಪ್ರಥಮ ದರ್ಶನ

ತಳೆದ ಮುಗಿಲ ಮುಸುಕಿನಲ್ಲಿ
ದಿನವು ಕೊರಗುತಿದ್ದಿತು.
ಮಳೆಯು ಮನಸಿನುಲ್ಲಸವನು
ಜಿನುಗಿ ತೊಳೆಯುತಿದ್ದಿತು.

ಹೊರಗೆ, ಕಾಂತಿ ಹಗಲಿಗಿಲ್ಲ ;
ಬರಿಯ ಮಂಕು ಕವಿದಿದೆ.
ಹರಿವ ಮಿಂಚು, ಸಿಡಿಲು ಇಲ್ಲ ;
ಹನಿವುದೊಂದೆ ತುಂತುರು.

ಒಳಗೆ, ಎಲ್ಲರೊಡನೆ ಕುಳಿತು
ಏನೊ ನೆನೆಯುತಿದ್ದೆನು.
ಸುಳಿಯಿತಾಗ ಮಿಂಚದೊಂದು
ಸೆಳೆದು ನನ್ನ ಕಣ್ಣನು.

“ ಬಾರೆ ತಾಯಿ, ಮಾವನವರಿ-
ಗೆರಗು ” ಎಂದ ಮಾತಿಗೆ—
ತೋರಿ, ಮೆಲ್ಲನೊಳಗಿನಿಂದ
ನಡೆದು ಬಂದ ಮಿಂಚದು.

ಅವಳ ಮುಗುಳುನಗೆಯು ಹೊನಲು
ಮನೆಯನೆಲ್ಲ ತುಂಬಿತು.
ಅವಳ ಕಣ್ಣ ಬೆಳಕಿನಲ್ಲಿ
ಹಗಲ ಮಂಕು ಚೆದರಿತು.

ಅಂದು ತನಕ ಬಂಧಿಸಿದ್ದ
ನನ್ನ ಮನದ ಬಾಗಿಲು
ಒಂದೆ ಸಲಕೆ ತೆರೆದುಹೋಯ್ತು—
ಅವಳು ಒಳಗೆ ಹೊಕ್ಕಳು.

ಎಷ್ಟು ಮಂದಿ ಕನ್ಯೆಯರನು
ಹಿಂದೆ ನೋಡಲಿಲ್ಲವು !
ಇಷ್ಟು ಬೇಗನಿಲ್ಲಿ ಮನಸು
ಹಿತವನೆಂತು ಪಡೆಯಿತು ?

ಚೆಲುವೆಯೆಂದು ನುಡಿಯಲಾರೆ ;
ಚದುರೆಯೇನೊ ತಿಳಿಯದು.
ಒಲಿದು ನನ್ನ ಹೃದಯವೆಂತು
" ಇವಳೆ ಸಾಕು " ಎಂದಿತು !

# ಸಂಬಂಧ

ನೋಡಿರುವೆ ನಾನೆಷ್ಟೊ ಜನರನೀ ಧರಣಿಯಲಿ,
ಮುಸುಕಲಿಲ್ಲವು ನನ್ನನವರ ಮಾಯೆ.
ನಂಟರಿಷ್ಟರೊಳೆನ್ನ ಮನದೊಲವು ನೆಲಸಿಯೂ
ಈ ಬಗೆಯ ಹೊಸ ರಾಗವುದಿಸಲಿಲ್ಲ.
ಇಳೆಯ ಸುಂದರಿಯರಾ ಕಡೆಗಣ್ಣ ನೋಟಗಳ್
ಸರಳೆನ್ನ ಹೃದಯವನು ಸೋಕಲಿಲ್ಲ.
ನೀನು ಮಾತ್ರವದೆಂತು ನನ್ನ ಚೈತನ್ಯವನು
ಸೆರೆಗೈದು ಪ್ರೇಮದಲಿ ಬಂಧಿಸಿರುವೆ?

ನಿನ್ನನರಿತಿರಲಿಲ್ಲ, ಕಂಡುಕೇಳಿರಲಿಲ್ಲ,
ಬಂಧುಬಳಗವು ಮೊದಲೆ ನೀನಲ್ಲವು.
ಬಾಲ್ಯದಲಿ ನಿನ್ನೊಡನೆ ಕಲೆತು ವಿಹರಿಸಲಿಲ್ಲ,
ಮತ್ತೆ ಚಿರಪರಿಚಯವು ನಮಗಿಲ್ಲವು.
ನಿನಗೆ ನಾನುಪಕಾರವೆಸಗಲಿಲ್ಲವು, ನೀನು
ನನ್ನ ಕಷ್ಟದ ದಿನದ ಬಗೆಯನರಿಯೆ.
ಸಂಬಂಧವಿಂತಿರಲು ನಮ್ಮನಿಬ್ಬರನೆಂತು
ಹೊಂದಿಸಿತು ಪ್ರೇಮದಲಿ ವಿಧಿಲಿಖಿತವು?

ಮೊದಲು ನಿನ್ನನು ನೋಡಿದೊಡನೆ ಅಂಕುರಿಸಿತೀ
ನವಭಾವಗಳ ಮೊಳಕೆ ನನ್ನೆದೆಯಲಿ.
ಅಂದು ಬಾಯ್ದೆರೆಯಿತೆನ್ನೆದೆಯ ಕತ್ತಲೊಳವಿತು
ಮೇಲೆ ತೋರದ ಪ್ರೇಮಮಂಜೂಷವು.

ನಾನು ನಂಬದ ಕಾರ್ಯವೊಂದು ನಡೆಯಿತು, ನನ್ನ
ಜೀವನದ ಬಗೆಯಿಂದೆ ಹೊಸದಾಯಿತು.
ಪ್ರಥಮದರ್ಶನದೊಳೇ ಪ್ರೇಮವುಕ್ಕುವ ತೆರವ-
ನಂದು ಮನಗಾಣಿಸಿದ ಗುರುವು ನೀನು.

ಹಿಂದೆ ಜನ್ಮಾಂತರದ ಸಂಜೆಗೆಂಪಿನಲಿ ಮೊಳೆತ
ನಮ್ಮ ಪ್ರೇಮದ ಮೊಗ್ಗೆ ಈ ಜನ್ಮದೆಳಹಗಲೊಳು
ಪ್ರಥಮದರ್ಶನದ ರವಿಯುದಯದಲಿ ಬಿರಿದರಳಿತು.—
ಬೀಜವಿಲ್ಲದೆ ವೃಕ್ಷವೇಳುವುದು ಜಗದೊಳುಂಟೇ !

# ಹೂವಿನ ಸರ

ಬರಿಯ ಮನಸಿನಲ್ಲಿ ನಾನು
ತಿರುಗುತಿದ್ದೆ ಕೋಣೆಯೊಳಗೆ.
ನೆರೆಯಿತಿರುಳು ; ನಿದ್ದೆ ಬರುವ
ಗಳಿಗೆಯೊಂದಿಗೆ
ಹೊರಗಿನಿಂದ ಬಳೆಯ ಸದ್ದು
ಸುಳಿದು ಬಂದಿತು.

ಯಾರು ಬಂದರೆಂದು ನೋಡ-
ಲೋರೆಗಣ್ಣು ಹರಿಯಿತತ್ತ :
ಹಾರಿತೆದೆಯು, ಮೈಯ ಪುಳಕ
ಜುಮ್ಮನೆದ್ದಿತು ;
ದೂರಕೊಡನೆ ಜಾರಿತಾಗ
ಸುಮ್ಮನಲಸಿಕೆ.

ಬಂದ ಹೆಣ್ಣು ನನ್ನ ಮಡದಿ—
ಅಂದಿಗೆರಡು ತಿಂಗಳಿಲ್ಲ
ನಿಂದು ಹಸೆಯಲವಳ ಕೈಯ
ನಾನು ಹಿಡಿದುದು ;
ಒಂದು ಮಾತನಾಡಿ ಇಲ್ಲ
ನಾನು ಅವಳಲಿ.

ಬಾಗಿಲಲ್ಲಿ ಬಾಲೆ ತಡೆದು,
ಹೋಗಿಬರುವರುಂಟೆ ಎನುತ

ಹಾಗೆ ಒಂದು ಬಾರಿ ತನ್ನ
ಕತ್ತಸೊಲೆದಳು ;
ಬೇಗ ಕೈಯಸೊಳಗೆ ನೀಡಿ
ಇತ್ತ ಸರಿದಳು.

ಬೆಳಕು ಕಡಮೆ ಕೋಣೆಯಲ್ಲಿ ;
ತಿಳಿಯದವಳ ಕೈಯಲೇನೊ ;
ತಿಳಿಯಿತೊಂದು ಮಾತ್ರ ನನಗೆ—
ಅವಳ ಪ್ರೇಮವು :
ಬೆಳೆದ ಲಜ್ಜೆಮುಸುಕನುಳಿದ
ಸವಿಯ ಭಾವವು.

ನನ್ನ ಬುದ್ಧಿಯರಿವ ಮೊದಲೆ
ನನ್ನ ಸೇರೆಯವಳ ಬಳಿಗೆ
ಮುನ್ನ ಹರಿದುಹೋಯಿತೊಡನೆ
ಕುಸಿದುಬಿದ್ದಿತು
ಚೆನ್ನೆಯೊಲಿದು ಪೋಣಿಸಿದ್ದ
ಕುಸುಮಮಾಲಿಕೆ.

ದಿಟ್ಟೆ ಹುಡುಗಿ ಎನುವಿರೇನೊ ?—
ಎಷ್ಟು ಕಷ್ಟದಿಂದ ಸರವ
ಗಟ್ಟಿಮನಸು ಮಾಡಿ ನನ್ನ
ಬಳಿಗೆ ತಂದಳೊ !
ಪುಟ್ಟ ಮೈಯೊಳೆಷ್ಟು ಒಲವೊ
ಅಳೆಯಬಲ್ಲೆನೆ !

ಒಂದು ಮಾತನಾಡಲಿಲ್ಲ,
ಒಂದು ನಿಮಿಷ ನಿಲ್ಲಲಿಲ್ಲ.
ಬಂದ ಮಿಂಚು ಮರಳಿತಿಷ್ಟೆ
ಸಾಕು ಪ್ರೇಮಕೆ.
ಹೊಂದಿ ಹೃದಯವೆರಡು ತಿಳಿಯ-
ಲೇಕೆ ನುಡಿಗಳು ?

# ಹೊರಡುವಾಗ

ಹಿರಿಯರಿರುವರೆಂದು ನಾಚಿ ನುಡಿಯಲಾರದವಳ ಕೊರಗು,
ತೆರೆದ ತುಟಿಯ ನಡುಕ, ಇನಿಸು ಬೆವತು ಕೆಂಪಗಾದ ಕೆನ್ನೆ,
ನೀರ ತೆರೆಯ ಹಿಂದೆ ಕಣ್ಣು ಹೀರುತಿರುವ ಬಯಕೆನೋಟ;—
ಊರಿಗಾದನು ನೋಡಿ ನೋಡಿ ಹೊರಡಲಾರೆ, ನಿಲ್ಲಲಾರೆ!

# ಪಶ್ಚಾತ್ತಾಪ

ಮರುಹಗಲು ತೆರಳುವೆನು ನಾನೆಂದು ತಿಳಿದು
ಹಿರಿಯರೆದುರಿಗೆ ಬೀಳುಕೊಳುವುದಕೆ ನಾಚಿ
ನನ್ನೆಡೆಗೆ ರಾತ್ರಿಯಲಿ ಹೆರರರಿಯದಂತೆ
ಚೆನ್ನೆ ನವವಧುವಂದು ಶಂಕಿಸುತ ಬಂದು,
"ಅಡಿಗೆರಗಿ ಹೋಗುವೆನು" ಎಂದು ನಿಟ್ಟುಸಿರು-
ಬಿಡಲು ಬೆಪ್ಪಾದಂತೆ ನಾನೇಕೆ ನಿಂತೆ?
ಮಣಿದವಳ ಹಿಡಿದೆತ್ತಿ ಮುಂಗುರುಳ ತಿದ್ದಿ
ಅಣಿಯಾಗಿ ತುಟಿ ಕೆನ್ನೆ ಕಣ್ಣ ಮುತ್ತಿಟ್ಟು
ಸೆಳೆದಪ್ಪಿ ನಲ್ನುಡಿಯನೇಕಾಡಲಿಲ್ಲ?
ಕುಲದ ಕಟ್ಟಳೆಗಂಜಿ ಮೋಸವಾಯ್ತಲ್ಲ!
ಆ ರೀತಿ ಮನ್ನಿಸಿದ ಕುಲದ ಕಟ್ಟಳೆಯೆ
ದೂರವಿರಿಸಿಹುದೀಗ ನಮ್ಮನಿಬ್ಬರನು!

# ಪ್ರಶ್ನೆ-ಉತ್ತರ

(ತ್ರಿಪದಿ)

ಹನ್ನೊಂದು ಹೊಡೆಯಿತು ; ಅಣ್ಣನ ಕೋಣೆಯ-
ಲಿನ್ನೂ ದೀವಿಗೆಯೋ ಆರಿಲ್ಲ.—ಇಂದೇಕೆ
ಮುನ್ನಿಲ್ಲದೋದ ಹಿಡಿದನು ?

ಚೆನ್ನಿ ತೌರೂರಿಗೆ ಹೋದಳು ; ಅವನಿಗೆ
ತನ್ನ ಮಂಚದಲಿ ಮನಸಿಲ್ಲ.—ಅದರಿಂದ
ಇನ್ನೂ ದೀವಿಗೆಯೋ ಆರಿಲ್ಲ !

# ಅಗಲಿಕೆ

ಬೇಗ ಕೂಡುವೆವೆಂಬ ನೆಚ್ಚಿಕೆಯೂರೆಗೋಲನು ನೆಮ್ಮಿ ನಿಲ್ಲುತ
ಸಾಗಿಹೋದೀ ವರುಷವೊಂದನು ನಾವದೆಂತೋ ಕಳೆದೆವು.
ಕೊಚ್ಚಿಹೋಯಿತು ಕುಲದ ಕಟ್ಟಳೆಯೆಂಬ ಹೊನಲಿನ ಸೆಳವಿನೊಳಗೆ
ನೆಚ್ಚಿಕೆಯ ಹುಸಿಯೂರೆಗೋಲದು; ಬೆಳೆದುಹೋದುವು ದಿನಗಳು.
ಕೂಡುವಾ ಮಾತೇಕೆ? ನೋಡುವ ಭಾಗ್ಯವೇ ನಮಗಿಲ್ಲ!—ಬಿರುಹೊಳೆ
ಕಾಡುತಿರುವುದು ನಮ್ಮ ಇಬ್ಬರ ನಡುವೆ ಮೊರೆಯುತ ಸರಿಯುತ.

ಈಯುವನು ನಾನೊಬ್ಬನಾದರೆ ಮೆಟ್ಟುವೆನು ಬಿಗಿಹಿಡಿದು ಗೋಳನು,
ಹಾಯುವೆನು ಗಂಡೆದೆಯಲೆದುರಿಸಿ ದೀರ್ಘವಿರಹದ ಕಿಚ್ಚನು.
ಅಯ್ಯೋ, ತಾಳುವಳೆಂತು ಕೋಮಲೆ ಹಿಂಗದಾ ಹಂಬಲಿನ ನೋವನು?
ಕೊಯ್ಯದೇ ನಾಚಿಕೆಯು ಕೊರಳನು, ಹೆರರಿಗುಸಿರುವೆನೆನ್ನಲು!
ಪಾಪಿ ನನ್ನೊಳದೇಕೆ ಲೋಕಕೆ ಮೀರಿದೊಲುಮೆಯನಿತ್ತೆ, ನಲ್ಲೆ?
ತಾಪದಲಿ ಕಂಗೆಡುವುದೊಂದೇ ಫಲವೆ ನಿನ್ನಾ ಪ್ರೇಮಕೆ!

# ನಿರಾಶೆ

ನಲ್ಲೆ, ನಿನ್ನನು ಸೆಳೆದು ಬಾಹುತೀ ಭುಜಗಳಲಿ
ಬಿಗಿಯುವಾ ಭಾಗ್ಯವನು ಕೇಳೆ ನಾನೀಗ ;
ಗಲ್ಲವನು ಮೇಲೆತ್ತಿ ತುಟಿಯ ಸವಿಯನು ಹೀರಿ
ನಗುವ ಕಣ್ಣನು ಚುಂಬಿಸಲು ಕೋರೆನೀಗ ;
ಚೆಲ್ಲಾಟವೂ ಬೇಡ ನಿನ್ನ ಜೊತೆಯಲಿ ; ಎರಡು
ನುಡಿಯನೂ ನಿನ್ನೊಡನೆ, ಕೊನೆಗೆ, ನಾನೊಲ್ಲೆ.
ಒಲ್ಲೆ : ನಿಲುಕದು ನನ್ನ ಸುಕೃತಕೀ ಸಿರಿಯೆಲ್ಲ ;
ತಡೆಯಲೊಪ್ಪುವೆ ದೂರಕೇರುವಾಸೆಯನು.
ಸುಡುವುದಯ್ಯೋ, ನನ್ನನೀ ಚಿಂತೆಯೊಂದೆ :
ಮುಖವೊಂದನಾದರೂ ನಾನೊಮ್ಮೆ ನೋಡಿ
ಸುಖಿಯಾಗಲೆಳಸಿದೆನು, ಪಾಪಿ ಕಣ್ಣಿನಲಿ ;—
ಕಡೆಗಿಷ್ಟು ಕರುಣವೂ ವಿಧಿಗಿಲ್ಲವಾಯ್ತೆ!

# ಬಿಸಿಲು ಕುದುರೆ

ಬಾಯಾರಿ ಹಂಬಲಿಸಿ ಮುಂದುವರಿಯುತಲಿಹೆನು
ಕೊನೆಯೆ ಕಾಣದ ಮರಳುಗಾಡಿನಲ್ಲಿ.
ಬೇಗ ದೊರೆಯುವ ತೆರದೊಳೆದುರಿನಲಿ ಮಿಂಚುವುದು,
ಕೆರಳಿಸುವುದಾಸೆಯನು ಬಿಸಿಲು ಕುದುರೆ.
ತವಕದಲಿ ಸಾರುವೆನು ; ಒಡನೆ ಹಿಂಜರಿಯುವುದು,
ಅಣಕಿಸುತ ಸರಿಯುವುದು ಬಲು ದೂರಕೆ—
ಕಾಲಚಕ್ರದ ಮರಳುಗಾಡಿನೊಳಗಣಕಿಸುತ
ಕಾಂತಾಸಮಾಗಮದ ಬಿಸಿಲು ಕುದುರೆ !

# ಹಿಡಿದ ವ್ರತ

ಬಾಲೆಯೊಬ್ಬಳು ಶಯನವೇರಿ
ಕುಳಿತು ಕಾಯುತಲಿರುವಳು ;
ಕೇಳಬಂದಿತು ಠಣಠಣನೆ
ಹತ್ತು ಘಂಟೆಯ ನಾದವು.

ಒಡನೆ ಗಾಂಭೀರ್ಯವನು ತಳೆದಳು ;
ಹೂಡಿ ಪದ್ಮಾಸನವನು
ಮಡಿಲ ಮರೆಯೊಳಗಿಂದ ತೆಗೆದಳು
ಭಾವಚಿತ್ರವನೊಂದನು.

ಅದರ ಮೇಲೆಯೆ ನಟ್ಟುಹೋಯಿತು
ಪ್ರೇಮಭಕ್ತಿಯ ನೋಟವು.
ಹೃದಯಕಪ್ಪವಳೊಮ್ಮೆ, ಮೆಲ್ಲನೆ
ತೆಗೆದು ತುಟಿ ಸೋಕಿಸುವಳು.

ಆಗಲಿ ದೂರದಲಿದ್ದ ನಾಥನ
ನೆನಪು ತುಂಬಿತು ಮನದಲಿ ;
ಅಗಲಿದಾ ದಿನ ತಾವು ಇಬ್ಬರು
ಹಿಡಿದ ವ್ರತವನು ನೆನೆದಳು :

“ ಇಲ್ಲಿ ಹೊಡೆದೀ ಹತ್ತು ಘಂಟೆಯೆ
ಅಲ್ಲಿಯೂ ದನಿಗೈಯುತ,
ನಲ್ಲನಲ್ಲೆಯರಿಬ್ಬರಾತ್ಮವ-
ನೊಂದುಗೂಡಿಸುತಿರುವುದು.

“ ಸೇರಿ ಮನದಲಿ, ಶಾಂತಿಗೊಳ್ಳಲು,
ಗಳಿಗೆಯೊಂದನು ದಿನದಲಿ
ಘೋರವಿರಹದ ಹಿಡಿತದಿಂದ
ಕಸಿದುಕೊಳ್ಳುತಲಿರುವೆವು.

“ ಈಗ ಕುಳಿತಿಹನಲ್ಲಿ ನೆನೆಯಲು,
ಈಗ ಸುಯ್ಯುತಲಿರುವನು ;
ಈಗ ಚಿತ್ರವನಪ್ಪುತಿರುವನು,
ಈಗ ಕಂಬನಿಗರೆವನು ! ”

* * *

ಏನು ಬಲ್ಲಳು ಬಾಲೆ : ನಲ್ಲನ
ಪ್ರೇಮ ಬತ್ತಿದ ಬಗೆಯನು ?
ತಾನು ಸಲಿಸುವ ಭಕ್ತಿಯೆಲ್ಲಾ
ಮಣ್ಣುಗೂಡುವ ಬಗೆಯನು ?

ಈಗ ಯಾರನು ನೆನೆಯುತಿರುವನೊ,
ಯಾರ ಚಿತ್ರಕೆ ಮಣಿವನೊ,
ಈಗ ಯಾರಪ್ಪಿಗೆಯಲಿರುವನೊ,—
ನಗರಮಾಯೆಯೆ ಬಲ್ಲಳು !

ದೂರದೂರಲಿ ಕಾದು ಕಂದಿದ
ಸತಿಯ ಹಂಬಲೆ ತೊರೆಯಿತು ;
ಜಾರಿದಾ ದಿನಗಳಲಿ ಹಿಡಿದಾ
ವ್ರತದ ಹೆಸರೇನುಳಿವುದೆ !

ಅವಳ ಸುಖವಸು ತೊಡೆದೆ, ದ್ರೋಹಿ !—
ಕೆಲವು ದಿನ ಹಿಂದಿರುಗದೆ
ಅವಳ ಹುಸಿ ನೆಚ್ಚಿಕೆಯನಾದರು
ಉಳಿಸು : ಕನಸನೆ ಸವಿಯಲಿ !

# ಉಪೇಕ್ಷಿತೆ

ಚಿನ್ನದೆಳೆ, ಡಾಬು, ಬಳೆ, ಮಣಿಯೋಲೆಯೇಕೆ ?
ಸರಿಗೆಗುಪ್ಪಸವೇಕೆ, ಹಿರಿ ದುಗುಲವೇಕೆ ?—
ನಿನ್ನ ಸಿರಿಯಿದನೆಲ್ಲ ಮೈತುಂಬ ನೇರಿಸಿ
ಲೋಕಕೆ ಪ್ರದರ್ಶಿಸುವ ಪುತ್ತಳಿಯಿದೆನಿಸಿ,
ನಿನ್ನೊಲವೆ ಸೋಕದೀ ನನ್ನ ಬದುಕೇಕೆ !

# ಸಂಶಯ

ಹವಣನರಿಯದ ನನ್ನ ಪ್ರಣಯಕ್ಕೆ ಬೇಸತ್ತು
  ತಾಳಲಾರದೆ ನನ್ನ ಪ್ರೇಮಭಾರವನು
ಅವಿತುಕೊಳ್ಳುವೆಯೇನು ? ನನ್ನ ಕಳೆ ರೋಸಿದರೆ
  ಹೇಳಲೊಲ್ಲೆಯದೇಕೆ ನನಗೆ ಸತ್ಯವನು ?
ಒಂದೊಂದು ಸಲ ಬಂದು ಸವಿಯ ನಗೆಯನು ಬೀರಿ
ಸಂದೇಹವೆಲ್ಲವನು ಮರೆಸಿ ನಂಬಿಸಿ ನಡೆವೆ ;
  ಗೋಳನೊಡ್ಡುವೆ ತಿರುಗಿ ನೀನುಪೇಕ್ಷೆಯಲಿ.
ದಿಟವನರಿತರೆ ನನ್ನ ಹೃದಯ ಬಿರಿಯುವುದೆಂದು
ತಟವಟದ ಕೇಳಿಯನು ನನ್ನೊಳಾಡುವೆಯ !

ಒಲುಮೆ ಹಿಂದಿರುಗುವುದು ಪೂರ್ವಪುಣ್ಯದ ಮಾತು ;
  ನಿಂದಿಸೆನು ಪ್ರೇಮವನು ನೀನೆರೆಯದಿರಲು.
ಬಲಿತ ಬೇರನು ಕಡಿದು ಸುಡುವೆ ನನ್ನಾಸೆಯನು—
  ಒಂದೆ ಬಾರಿಗೆ ಮುಗಿವುದದರ ಕಥೆಯೆಲ್ಲ !
ಒಮ್ಮೆ ನಂಬಿಕೆ, ಈಗ, ಮರುಗಳಿಗೆಯಲೆ ಶಂಕೆ,
ನೆಮ್ಮದಿಯ ಹೆಸರುಂಟೆ ?—ನಿಮಿಷನಿಮಿಷಕೆ ಹೊರಳಿ
  ಕಂದಿಹೋಯಿತು ಮನಸು : ನಾ ಹುಚ್ಚನಾದೆ.
ಸಂಶಯದ ನರಕದಲಿ ನನ್ನನೇಕುರುಳಿಸಿದೆ ?
ಹಿಂಸೆಯಿದಕಿಂತಲೂ ಮರಣವೇ ಲೇಸು !

# ಒಲವೋ ಹಗೆಯೋ

ಮಿಕ್ಕವರಲಿ ನಗೆಗೂಡುತ ಬೆರೆವೆ,
ನನ್ನೊಂದಿಗೆ ಬರಿಗೋಳನೆ ಕರೆವೆ ;
ಒಲವೋ ಹಗೆಯೋ—ಯಾವುದಿದು ?

ಹೆರರೇನೆನ್ನಲಿ, ಕೇಳುತ ನಲಿವೆ,
ಸರಸವನಾಡಲು ನನ್ನಲಿ ಮುನಿವೆ ;
ಒಲವೋ ಹಗೆಯೋ—ಯಾವುದಿದು ?

ಕುಳಿತರೆ ನಿಂತರೆ ಹುಳುಕನೆ ಬಗೆವೆ,
ತುಸ ತಪ್ಪಾದರು ಕಲಹವ ತೆಗೆವೆ ;
ಒಲವೋ ಹಗೆಯೋ—ಯಾವುದಿದು ?

ಪ್ರಣಯವ ಜೀರಲು, ಕಪಟವಿದೆನುವೆ,
ಸುಮ್ಮನೆ ಸಾರಲು, ಒಲವಿಲ್ಲೆನುವೆ ;
ಒಲವೋ ಹಗೆಯೋ—ಯಾವುದಿದು ?

—ದೂರಿದೆನಲ್ಲವೆ ನಿನ್ನನು ಹೆಚ್ಚು ?
ನನಗಾದರೊ, ಈ ‘ಹಗೆ’ಯೂ ಮೆಚ್ಚು !
ಒಲವೋ ಹುಚ್ಚೋ—ಯಾವುದಿದು !

# ಸಮಾಧಾನ

ಕಣ್ಣುಮರೆಯಾದೊಡನೆ ಕಳವಳಿಸಿ ತವಕದಲಿ
ನನ್ನನರಸುತಲಿದ್ದೆ ಹಿಂದೆ ನೀನು.
ನನ್ನ ಜೊತೆಯಲಿ ಸೇರಿ ಸಲ್ಲಾಪಗಳಲಾಗ
ಹೊತ್ತು ಮೀರಿದುದನೇ ತಿಳಿಯದಿದ್ದೆ.
ನನ್ನ ದುಃಖಗಳಲ್ಲಿ ಮನಗರಗಿ ನೀನತ್ತೆ;
ನನ್ನ ಸಿರಿಯಲಿ ಹಿಗ್ಗಿ ನೀನು ಮೆರೆದೆ.
ನಮ್ಮ ದೇಹಗಳೆರಡು, ಚೈತನ್ಯವೊಂದೆಂಬ
ಮಾತು ದಿಟವೆಂಬಂತೆ ನೀನು ನಡೆದೆ.
ಎಲ್ಲಿ ಹೋಯಿತು ನಿನ್ನ ಹಿಂದಿನಾ ಪ್ರೇಮವೆಲ್ಲ?
ನನ್ನಿರವನೇ ಮರೆತು ಹೇಗೆ ನೀನಿರುವೆ ಇಂದು?
ಅಂದು ಧಗಧಗನುರಿದು ನನಗೆ ಬೆಳಕೀಯುತಿದ್ದ
ಜ್ವಾಲೆ ಫಟ್ಟನೆ ಹೀಗೆ ತಣ್ಣಗಿಂದಾರಿತೇಕೆ?

ನನ್ನೊಲವಿನಲಿ ಕುಂದು ಕಾಣಬಂದಿತೆ ನಿನಗೆ;
ನಿನ್ನ ಪ್ರೇಮದ ಸಮಕೆ ಬರಲಿಲ್ಲವೆ?
ನಿನ್ನನೆಂದಾದರೂ ಧಿಕ್ಕರಿಸಿ ನುಡಿದೆನೇ?
ನನ್ನ ನಡೆ ನಿನಗೊಪ್ಪಲಿಲ್ಲವೇನು?
ಕಣ್ಣ ನೋಟಕೆ ಮೊದಲು ಸವಿಯಾಗಿ ತೋರಿದೀ
ರೂಪದಲಿ ದೋಷಕೆಡೆ ಸಿಕ್ಕಿತೇನು?
ನನ್ನೊಡನೆ ಪರಿಚಯವು ಹೆಚ್ಚಿಬಂದಂತೆಲ್ಲ
.ನನ್ನ ಕೆಳೆಯಲ ಬಯಕೆ ಕುಗ್ಗಿತೇಕೆ?

ಕಾರಣಗಳಿಲ್ಲದೆಯೆ ಮೇಲಕುಕ್ಕಿದ ಪ್ರೇಮವು
ಕಾರಣಗಳಿಲ್ಲದೆಯೆ ಸುಮ್ಮನೆಯೆ ಬತ್ತಬೇಕೆ?
ಕಳೆದ ಜನ್ಮಗಳಿಂದ ಬೆಳೆದ ಸಂಬಂಧವೆಂದು
ನಾನು ನಂಬಿರಲದೇ ನಿಮಿಷದಲಿ ಬಯಲಾಯಿತೆ!

ಹಿಂದೆ, ಮೊದಲಲಿ ನಾನು ನನ್ನ ಗುಟ್ಟಿಲ್ಲವನು,
ಹೃದಯದಲಿ ಬಚ್ಚಿಟ್ಟ ನನ್ನೊಲವನು
ತಡೆಯಲಾರದೆ ಬಿಚ್ಚಿ ನಿನಗೆ ಹೇಳಿದ ದಿನದ
ನೆನಪು ನನಗಿರುವಂತೆ ನಿನಗಿರುವುದೆ?
ನನ್ನ ಮಾತನು ಕೇಳಿ, ಹುಚ್ಚು ಮಾತನು ಕೇಳಿ
ಸುಮ್ಮನೇತಕೆ ನೀನು ನಡೆಯಲಿಲ್ಲ?
ನನ್ನಂತೆಯೇ ನಿನ್ನ ಹೃದಯದಲಿ ಪ್ರೇಮವಾಗ್ನಿ-
ಯುರಿವ ವಾರ್ತೆಯನೆಲ್ಲ ನುಡಿದೆಯೇಕೆ?
ನನ್ನೊಬ್ಬನಲ್ಲಿಯೇ ಪ್ರೇಮವಂಕುರಿಸಿದ್ದರೆ—
ಆಸೆಗಳು, ಹೃದಯವನು ಕುಣಿಸಿದಾ ಸುಖದಿನಗಳು
ಹುಟ್ಟಲೆಡೆಯಿರಲಿಲ್ಲ; ನಿಜ. ಅಲ್ಲೆ ತಡೆದಿದ್ದರೆ
ಇಂದು ಕರುಳನು ಕೊರೆಯುವಳಲಿಗೂ ದಾರಿಯಿಲ್ಲ.

ಎಲ್ಲಿಂದಲೋ ಒಲವು ಬಂದು ಮನಸನು ಹೊಗಲು
ಯಾರು ತಡೆಯುವರದರ ಪ್ರೇರಣೆಯನು!
ಫಲವುಂಟೊ, ಇಲ್ಲವೋ, ನನ್ನ ನೊಲಿದಿರಬಹುದೊ—
ಎಂಬ ಯೋಚನೆಗಳೇ ಜನಿಸದಂತೆ
ಮರುಳಾಗಿ ಮೈಮರೆತು ದೂರದಿಂದಲೆ ತನ್ನ
ಪ್ರಿಯಜನಕೆ ಪ್ರೇಮವನು ಸಲಿಸಬಹುದು.

ಬಿರಿದುದೇ ಸಾಕೆಂದು ಹೂವು ನಲಿಯದೆ? ಮತ್ತೆ
ದೇವರಡಿಯಲಿ ಬೇಡುವುದೆ ವರವನು!
ಈ ಬಗೆಯ ಕಥೆಯೆಷ್ಟೊ ಧರಣಿಯಲಿ ನಡೆದಿರುವುದು;
ನನ್ನೊಲುಮೆಯೊಂದರೊಳೆ ತೃಪ್ತಿಗೊಂಡಿದ್ದನಂದು.
ಬೂದಿ ಮುಸುಕಿದ ಸಣ್ಣ ಕೆಂಡದುರಿ ಕಾಣದಂತೆ
ಆಸೆಗೂಡದೆ ನನ್ನ ಮನದೊಲವು ಮಲಗಿದ್ದಿತು.

ನಾನು ನುಡಿದಂತೆಯೋ, ನನ್ನೊಲವಿನಂತೆಯೋ
ನಿನ್ನ ಪ್ರೇಮದ ಬಗೆಯನೊರೆದೆ ನನಗೆ.
ಆ ಗಳಿಗೆ ಮರೆಯುವುದೆ, ಆ ನುಡಿಗಳಳಿಯುವುವೆ
ನನ್ನ ಮೈಯಲಿ ಪ್ರಾಣವಿರುವ ವರೆಗೆ!
ಎಲ್ಲಿ ಹೋಗುವೆನೆಂಬ ತಿಳಿವಿಲ್ಲದೆಯೆ ನಡೆವ
ಕುರುಡನಿಗೆ ಕಣ್ಣುಗಳು ಬಂದುವಾಗ.
ತಡೆದಿದ್ದ ನಮ್ಮೊಲವು ಹರಿದು ಥಟ್ಟನೆ ಕೂಡಿ
ಮಿಂಚುಗಿಡಿಯನು ಸುರಿಸಿದಂತಾಯಿತು.
ಊಹೆಯನು ಮೀರಿರುವ, ಕೊರತೆಯೋ ಇಲ್ಲದಿರುವ
ಹೊಸ ಸೃಷ್ಟಿಯೊಂದರಲಿ ನಾನಿರುವೆನೆಂದು ಬಗೆದೆ.—
ಅಯ್ಯೊ, ಮರಳೊಟ್ಟಿನಲಿ ಚಿಕ್ಕ ಮಕ್ಕಳು ಕಟ್ಟುವ
ಮನೆಯಂತೆ ನಿಮಿಷದಲಿ ಕುಸಿವುದೆಂದರಿಯಲಿಲ್ಲ!

ನನ್ನ ಬಾಳಿನ ಮಾರ್ಗದಲಿ ನೀನು ಸುಳಿದಾಡಿ
ಮತ್ತೇತಕೋ ಬೇಗ ದೂರವಾದೆ.
ಎಂತು ಮೊದಲಿನ ನಿನ್ನ ನಿಜದೊಲವು ಮುಸುಳಿಸಿತೊ,
ದಿಟವಾಗಿ ಹೇಳುವೆನು, ನಾನರಿಯೆನು.

ನಿನ್ನ ನೆನಪನು ನಾನು ತೊರೆಯುವುದಕೆಳಸುವೆನು :
ಬುದ್ಧಿ ಹೇಳುವ ಮಾತನೆದೆ ಕೇಳದು !
ನಿನ್ನೊಲವಿನಲಿ ಹಿಂದೆ ಪಡೆದ ಸುಖವನೆ ನೆನೆದು
ನನ್ನ ಹೃದಯವು ಕೊರಗಿ ಕರಗಿರುವುದು.
ಒಂದೊಂದು ಸಲ ವಿರಹದಳಲಿನಲಿ, ಬದುಕಿದೆಲ್ಲ
ಬರಿಯ ದುಃಖವೆ ಹೊರತು ಸುಖವಿಲ್ಲವಿಲ್ಲವೆಂದು
ತೋರುವುದು ; ತನ್ನಾಸೆಯಿಂತೊಡೆದು ಹೋದ ಮೇಲೆ
ಜೀವಿಸುವುದಿನ್ನೇತಕೆಂದು ಕೇಳುವುದು ಮನಸು !

*　　　*　　　*

ನಿನ್ನನೇತಕೆ ಮತ್ತೆ ದೂರುವೆನು ನಾನಿಂತು,
ನಿನ್ನ ತಪ್ಪೇನಿಲ್ಲಿ, ನನ್ನದೇನು ?
ಕೋರಿದರೆ ಬಾರದೀ ಒಲುಮೆ, ನಿಲ್ಲದು ಒಳಿಕ
ತಾನು ಹೋಗುವ ಕಾಲವೊದಗಿದ್ದರೆ.
ಸಾಕು ನನ್ನನುಭವವೆ : ನಿನ್ನಿಂದ ಪ್ರೇಮವೇ-
ನೆಂಬುದನು ತಿಳಿದುದೇ ಸಿರಿಯಲ್ಲವೆ ?
ಬಂದ ಶೋಕವು ಬರಲಿ ; ಕೀಳಲು ಗುಲಾಬಿಯನು
ಮುಳ್ಳು ಚುಚ್ಚುವುದೆಂದು ಹೆದರಬಹುದೆ !
ನಿನಗೆ ನಾನರ್ಪಿಸಿದ ಬಗೆಯ ಪ್ರೇಮವೆ ಮೊಳೆಯದೆ
ದಿನದಿನವು ಲೋಕದಲಿ ಹುಟ್ಟಿ ಸಾಯುವರು ಜನರು.
ದೇವಮಾಯೆಯ ತೆರೆಯಲಿಣಿಕಿ ನೋಡಿದೆನು ನಾನು ;
ಸಾಕು ನನಗಿದೆ : ಮತ್ತೆ ಕೊರಗುವುದು ಹುಚ್ಚುತನವು !

# ಏಕೆ ನಲುಗಿತು

ಏಕೆ ನಲುಗಿತು ನಮ್ಮ ಪ್ರೇಮವು,
ಇಂತು ವಿಗಡಿಸಿಕೊಂಡಿತು ?
ಯಾರ ಕಣ್ಣೆ ನರಾಯಿತು !

ಅಗಲಿಕೆಯ ಬೇಗೆಯನು ಸಹಿಸದೆ
ತಿರುಗಿ ಕೂಡಲು ತವಕಗೊಳುವೆವು ;
ಕಂಡ ಕೂಡಲೆ,—ಮುನಿವೆವು,
ಕಾದಿ ಕಂಬನಿ ಸುರಿವೆವು.
ಹೃದಯದಲಿ, ನಾವರಿಯದಂತೆ
ಎಲ್ಲೊ, ವಿರಸತೆಯೆಂಬ ಬಿರುಸು
ಅವಿತುಕೊಂಡೇ ಇರುವುದು ;
ನಾವು ಸೇರಲು ಸಿಡಿವುದು.

ನಾವು ಇಬ್ಬರೆ ಪ್ರಣಯಗೊಳ್ಳಲು
ಪರರ ಜೊತೆಯನು ತೊರೆವೆವು ;
ಬೆಳೆದ ಹೆಬ್ಬಯಕೆಯಲಿ ಸುಖವನು
ಸವಿಯಲೋಸುಗ ಬೆರೆವೆವು.
ಹೀನಭಾಗ್ಯವಿದೇನು ನಮ್ಮದು ?—
ಸುಖದ ಸುಳಿವನೆ ಕಾಣೆವು.
ಕಲಹವಿಲ್ಲದ ದಿವಸವೆಲ್ಲಿ ?
ತಪ್ಪನೆಣಿಸದ ಸರಸವೆಲ್ಲಿ ?
ಎಲ್ಲಿ ಪ್ರಣಯವಿನೋದವು !

೨೫

ಒಬ್ಬರೊಬ್ಬರಸಿರಿಯುವುದಕೇ
ನಮ್ಮ ಪ್ರೇಮವು ಹುಟ್ಟಿತೆ!
ಕಷ್ಟದಲಿ ನೆರವಾಗಲೆಳಸುತ
ಆಳಲನಿನ್ನೂ ಹದಿವೆವು.
ಹಿತದ ಮಾತನು ಹೇಳಲೆಳಸುತ
ಎದೆಯ ಹುಣ್ಣನು ತೆರೆವೆವು.
ಬೆಸೆವುದಿಬ್ಬರ ಬಾಳನೆಂದು
ನಾವು ಕಟ್ಟಿದ ಪ್ರೇಮಪಾಶವೆ
ನಮ್ಮ ಕೊರಳನು ಬಿಗಿಯಿತು,
ನಮ್ಮದಿಗೆ ಉರಲಾಯಿತು.
ಯಾವ ಪಾಪವೊ, ಯಾರ ಶಾಪವೊ—
ಪ್ರೇಮವೀ ಬಗೆಯಾಯಿತು!

ನಮ್ಮ ಪ್ರಣಯವೆ ನಮಗೆ ಹಗೆಯೆ,
ನಮ್ಮ ಹೃದಯವೆ ನಮಗೆ ಹಗೆಯೆ,
ನಮ್ಮ ಸೌಖ್ಯಕೆ ಮೃತ್ಯುವೆ?
ಸಲ್ಲದೀ ಸಂಶಯದ ಮನಸೇ
ಕೊಲ್ಲುತಿರುವುದೆ ನಮ್ಮನು!

ನಮ್ಮ ಕೆಳೆಯನು ಸಹಿಸಲಾರದೆ
ಕ್ರೂರವಿಧಿ ಗೋಳಿತ್ತನು,
ಬಿತ್ತಿದನು ಸಂಶಯವನು.
ಇದುವರೆಗೆ ನಾವವನಸೂಯೆಗೆ
ಕೊಟ್ಟ ಬಲಿಯೇ ಸಾಲದೆ?

ಪ್ರೇಮವಸು ಪಡೆದುದಕೆ, ದುಃಖದ
ತೆರಿಗೆ ತೆತ್ತುದು ಸಾಲದೆ?—
ಬಾರ, ನಾವಿನ್ನೊಂದುಗೂಡುವ,
ಮತ್ತೆ ಒಮ್ಮನಸಾಗುವ,
ಸಂಶಯವ ಕಿತ್ತೊಗೆಯುವ,
ವಿಧಿಯ ವಂಚಿಸಿ ನಲಿಯುವ!

# ತನಗೆ

ಸುಮ್ಮನೇಕೆ ಕೊರಗುತಿರುವೆ, ಕಣ್ಣ ನೀರನೇಕೆ ಮಿಡಿವೆ?
ಒಮ್ಮೆ ಒಮ್ಮೆ, 'ಪ್ರಿಯನ ಮನಸು ಕಠಿನ'ವೆಂದುಕೊಳುವೆಯೇಕೆ?
ಬರಿಯ ಸುಖದ ಕ್ರೀಡೆ ಪ್ರೇಮವೆನುತ ನೀನು ಬಗೆದೆಯೇನು?
ಇರಿತಗಳನು ತಾಳದವರಿಗಿದರ ಗೊಡವೆಯೇತಕೆ?

ಅವನು ನಲಿವನೆಂದು ನೆಚ್ಚಿ ನಿನ್ನ ಸೇವೆಯನ್ನು ಗೈದೆ;
ತವಕದಾಸೆಯಿಂದ ಫಲವು ಬರುವ ಗಳಿಗೆಯನ್ನೆ ಕಾದೆ.—
ದೊರೆವುದೆಂದೆ ನಂಬಿ ಹೃದಯವೆದುರುಗೊಳಲು ತುಡಿದು ಬಂದ
ಸಿರಿಯೆ ವಿಧಿಯ ಮೊದಲ ತುತ್ತು ಎಂದು ತಿಳಿಯಲಿಲ್ಲವೆ!

ಭುಜದ ಹವಣು ಮೀರಿತೆಂಬ ತೆರದಲಿಂದು ನೀನು ದುಡಿದೆ;
ನಿಜದ ಪ್ರೇಮವೊಪ್ಪಿ ತಂದ ಕಾಣಿಕೆಯನು ಸಲಿಸಿಬಿಟ್ಟೆ.
ಕಳೆಯಿತಿನ್ನು ನಿನ್ನ ಭಾರ: ಕೊಡುವುದೊಂದೆ ನಿನ್ನ ಕೆಲಸ.
ತಿಳಿದ ದಾರಿಯಲ್ಲಿ ನಡೆದೆ.—ಮಿಕ್ಕ ಚಿಂತೆಯೇತಕೆ?

ಪ್ರಿಯನು ಮೆಚ್ಚಲಿಲ್ಲವೇನು? ನೋಡಿ ನುಡಿಸಲಿಲ್ಲವೇನು?
ಬಯಸಿ ಬಯಸಿ ನೀನು ತೋರಿದೊಲವನರಿಯಲಿಲ್ಲವೇನು?—
ಮರುಳು ಮನಸೆ, ಕೇಳಿದಾಗ ಮೆಚ್ಚುನುಡಿಯು ಒಡ್ಡಿ ನಿನಗೆ
ದೊರೆಯುವುದಕೆ ಪ್ರೇಮವೇನು ಹಳೆಯ ಸಾಲವಾಯಿತೆ!

'ಕೊಟ್ಟೆ ನಾನು' ಎಂಬ ಗರ್ವವೇಕೆ ನಿನಗೆ; 'ನನ್ನ ಪ್ರಿಯನು
ಮುಟ್ಟಿ ನೋಡಿ ನಲಿದು ಹೊಗಳಲಿಲ್ಲ'ವೆಂಬ ದುಃಖವೇಕೆ?
ಒಲುಮೆಹುಚ್ಚು ಹಿಡಿದ ಮೇಲೆ ತನ್ನ ಬಾಳಿನೆಣಿಕೆಯುಂಟೆ!
ಒಲಿವುದೊಂದೆ ತನಗೆ ಗೊತ್ತು: ಬೇರೆ ಬಿಂಕವುಳಿವುದೆ!

ನೋಡು, ಬಳಿಯ ದಾಸನೊಲಿದು ತಂದು ಕೈಯಲಿಟ್ಟ ಹೂವು
ಬೇಡವಾಗಲದನು ದಣಿಯು ಮೂಸಿ ಮುಡಿಯದೆಸೆದುಬಿಡಲು,—
ಶೋಕವೇಕೆ, ತಾಪವೇಕೆ? ' ಸೇವೆಗೈದೆನೆಂಬ ನೆನಪೆ
ಸಾಕು ' ಎನದೆ ದಾಸನಳಲಿ ಕುದಿಯಬಹುದೆ ಸುಮ್ಮನೆ!

# ನಡೆದ ಸಂಗತಿ

ಕುಳಿತು ಮಂಚದ ಮೇಲೆ, ಪ್ರೇಮದಲಿ ಕಾಮದಲಿ
ತರುಣ ರಮಣನು ಬಯಕೆನೋಟಗಳನು
ಸುಳಿಸುತಿರುವನು ನಾಚಿ ಹುದುಗಿರುವ ಸತಿಯೆಡೆಗೆ,
ನೆರೆದ ಹೊಸ ಜವ್ವನದ ಸಲ್ಲೆಯೆಡೆಗೆ.

ಅವಳ ತಗ್ಗಿದ ಮುಖವು, ನೆಲಕೆ ನಾಟಿದ ಕಣ್ಣು
ಇನಿಯನಿಂಗಿತವರಿಯಲಂಜುತಿರಲು,
ಅವಳ ಮುಡಿಮಲ್ಲಿಗೆಯ ತನಿಗಂಪು ಹರಿಹಾಯ್ದು
ರಮಣನೆದೆಯಲಿ ಸೊಕ್ಕನುರಿಗೊಳಿಸಿತು.

ಅಂದೆ ಪತಿಪತ್ನಿಯರ ಮೊದಲೊಸಗೆ.—ತರುಣನಿಗೆ
ಪ್ರೇಮಫಲವನು ಸೂರೆಗೊಳುವ ತವಕ;
ಹಿಂದೆಲ್ಲ ಮನಸಿನಲಿ ನೆನೆದ ಸುಖಸರಸವನು
ಇಂದು ಸತಿಯೊಡನಾಡಿ ತಣಿವ ತವಕ.

ಹತ್ತಿರಕೆ ಸಲ್ಲೆಯನು ಸೆಳೆದು ಮೊಗದಿರುಹಿಸಲು
ಒಲಿದ ತೋಳೊತ್ತಿದನು ಕೊರಳ ಮೇಲೆ;
ಒತ್ತಿದನು,—"ಹಾ!" ಎಂದು ಚೀರಿ ಕೈಯನು ಕಿತ್ತು
ಹಾಸಿಗೆಯ ಮೇಲುರುಳಿ ನೈಮರೆತನು.

ಹಸುರುಗಟ್ಟಿತು ತೋಳು.—ಸತಿಯ ಕೂಗನು ಕೇಳಿ
ಬಂದ ಜನವರಸಿದರು ಕಾರಣವನು:
ಹೊಸ ಮುಡಿದ ಮಲ್ಲಿಗೆಯ ದಂಡೆಯೊಳಗಡಗಿದ್ದ
ಕಿರುಸೂಜಿಯುದ್ದದೆಳನಾಗರವನು.

ಅಯ್ಯೋ, ಮಡದಿಯ ಜಡೆಯೆ ಮೃತ್ಯುಪಾಶವದಾಯ್ತೆ,
ಒಸಗೆಮಂಚವೆ ಮರಣಶಯನವಾಯ್ತೆ !
ಅಯ್ಯೋ, ಸತಿಯೊಲುಮೆಯಸು ಸವಿವೊಂದು ತವಕವೇ
ಯಮಪುರಕೆ ಪಯಣಿಸುವ ತವಕವಾಯ್ತೆ !

ಒಂದು ಸಲವಾದರೂ ತುಟಿಗೆ ಮುತ್ತಿಡಲಿಲ್ಲ,
ಸೆಳೆದಪ್ಪಿ ಚೆಲುವೆಯಸು ನಲಿಯಲಿಲ್ಲ !—
ಬೆಂದು ಮರುಭೂಮಿಯಲಿ, ಕಂಡು ಸೋಕಿದ ಜಲವೆ
ದಾಹವಣಗುವ ಮೊದಲೆ ವಿಷವಾಯಿತೆ !

# ಅಂಜಿಕೆ

ನನ್ನ ತೋಳಿನ ನಡುವೆ, ನನ್ನೆದೆಗೆ ಬಿಗಿದು
ತನ್ನ ತನುವನು ನನ್ನ ಕಾವಲಿಗೆ ಬಿಟ್ಟು,
ವಶಗೊಂಡ ನಿದ್ದೆಯಲಿ ನನ್ನ ಸಿರಿ ನಂದು
ಹಸುಮಗುವಿನಂತೆ ಮೈಮರೆತು ಮಲಗಿರಲು,—
ಬಿಗಿಯಪ್ಪಿ ನಿಧಿಯದನು ಕಾದಿರುವ ನನಗೆ
ಬಗೆಯೊಳೆಂತೋ ಘೋರ ಭಯಂವುದಿಸಿತೊಂದು :
" ಇಲ್ಲಿಯೇ ಹೀಗೆಯೇ ಜೀವನವು ಮುಗಿದು
ನಲ್ಲನಳಿದರೆ—! " ಎಂದು ಎದೆ ಬೆಚ್ಚಿಹೋಯ್ತು.
ಒಡನೆ, ತುಟಿಯೊಳಗುಸಿರು ಹರಿವುದನು ಹಿಡಿದೆ ;
ತಡಹಿ ಮೈಯನು, ಬೆಚ್ಚಗಿರುವುದನು ತಿಳಿದೆ.
ಬದುಕಿಹನು, ಬದುಕಿಹನು ನನ್ನಿನಿಯನಿನ್ನೂ !
ಹೃದಯದಂಜಿಕೆ ಮಾತ್ರ ಕೊನೆಗಾಣಲಿಲ್ಲ :
ಮತ್ತೆ ದೃಢತರವಾಗಿ ನನ್ನ ಭಾಗ್ಯವನು
ಒತ್ತಿ ನನ್ನೆದೆಗಪ್ಪಿ ಬಚ್ಚಿಟ್ಟೆನಲ್ಲ !

# ಪ್ರೇಮ ಭೈರವ

ಸುಡುವ ಬೆಂಕಿಗೆ ಕೈಯನೊಡ್ಡಿ
ಹುಡುಗ, ನಗುನಗುತಿರುವೆಯಲ್ಲ!
ಹಡೆದವರು, ಕಾಪಾಡುವವರು
ನಿನಗೆ ಯಾರೂ ಇಲ್ಲವೆ?

ಚೆನ್ನೆಯೊಬ್ಬಳ ಕಣ್ಣ ಹೊಳಪಿನ
ಬಣ್ಣಬಣ್ಣಕೆ ಬೆರಗುಗೊಂಡು
ಚಿಣ್ಣ, ನೀನು ಪತಂಗದಂತೆ
ಹಾರಿ ನಲಿಯುತಲಿರುವೆಯೊ!

ಅವಳು ಒಲಿದಳು, ನೀನು ಒಲಿದೆ;
ಕವಲುಗೊಂಡಿತು ನಿಮ್ಮ ನಲವು.
ಸವೆಯದಮೃತವು ದೊರೆಯಿತೆಂದು
ಇಷ್ಟರಿಂದಲೆ ಬಗೆದೆಯೊ!

ನಿಮ್ಮ ಇಬ್ಬರ ಪ್ರೇಮಲತೆಯನೆ
ನಿಮ್ಮ ಕೊರಳಿಗೆ ಸೇರಿ ಬಿಗಿದು,
ನೆಮ್ಮದಿಯನುಡುಗಿಸುವ ಮಾರನ
ತಂತ್ರವನು ನೀನರಿಯೆಯೊ!—

ವಿರಹವೆನ್ನುವ ಬೇಗೆಯೆಬ್ಬಿಸಿ
ಉರಿಗೊಳಿಸಿ ಸಂತಪಿಸಿ ತನುವನು,
ಅರೆಯುವನು ಸೌಖ್ಯವನು ಕಾಮನು;
ಅಡಗಿಸುವನುಲ್ಲಸವನು.

ಒಳಗೆ ಸಂಶಯವೆಂಬ ಬೀಜವ
ಬೆಳೆಯಬಿಟ್ಟು ಮುಗಿಲ ಮುಟ್ಟಿಸಿ,
ಹಿಳಿದುಬಿಡುವನು ಶಾಂತಿರಸವನು ;
ಸಾವೆ ಲೇಸೆನ್ನಿಸುವನು.

ಕಡೆಗೆ ಸಖಿ ಮೃತ್ಯುವನು ಕಳುಹಿ
ಒಡೆದು ನಲ್ಲರ ಜೋಡಿಬಾಳನು,
ಕೆಡಹುವನು ತಳವಿಲ್ಲದಳಲಿನ
ಕೂಪದಲಿ ಉಳಿದವನನು.—

ಉರಿವ ಬೆಂಕಿಗೆ ಕೈಯನೊಡ್ಡಿ
ತರಳ, ತಿಳಿಯದೆ ನಗುವೆಯಲ್ಲ !
ಸರಸನೃತ್ಯವೆ ಪ್ರೇಮ ?—ಭೀಷಣ
ಭೈರವನ ತಾಂಡವವದು !

‘ ಅಮರುಕಕವೇರೇಕಃ ಶ್ಲೋಕಃ ಪ್ರಬಂಧಶತಾಯತೇ ’

## ಪ್ರಸ್ಥಾನ ಕಾಲ

ಹೋಗಬೇಡವೊ ಎನಲಮಂಗಳವು ; ಹೋಗೆನ್ನ-
ಲಾ ಮಾತಿನೊಳಗಿಲ್ಲ ಪ್ರೇಮದ ಸೆಲೆ.
ತಡೆ ಎನ್ನಲಾಜ್ಞೆ ; ನಿನ್ನಿಷ್ಟದಂತೆನಗು ನೀ-
ನೆಂದರೂ ಬೇಸರದ ನುಡಿಯಾಯಿತು.
ನಿನ್ನಗಲಿದ ಒಳಿಕ ನಾನು ಬದುಕಿರಲಾರೆ-
ನೆಂಬುದನು ನಂಬುವೆಯೊ, ಮತ್ತಿಲ್ಲವೊ ?
ನೀನು ಪಯಣಿಸುವಾಗ ತೊಂದುವಾ ನುಡಿಗಳನು
ನಲ್ಲ, ನೀನೇ ನನಗೆ ಹೇಳಿ ಕಲಿಸು.

—ಸುಭಾಷಿತಾವಲಿ, ೧೦೪೯.

* * *

ಹೊರಡುವೆನು ಎಂದ ನುಡಿ ಕೇಳಿಸಿತು ; ಹಿಂದಿರುಗು-
ವವಧಿಯನು ನಿಲಿಸಿದಳು ನೆನಪಿನಲ್ಲಿ.
ಮನೆಯ ಮೇಲಿನ ಗಮನವಿರಲಿ ನಿನಗೆನ್ನುವಾ
ನುಡಿಗಳೂ ನೆಲಸಿದುವು ಕಿವಿಗಳಲ್ಲಿ.
ತರಳೆ, ನೀನಳಬೇಡ ಎಂದು ಹೇಳುವ ಪತಿಯ
ಮುಖವ ನಿರುಕಿಸಿ, ಬಿಟ್ಟು ನಿಟ್ಟುಸಿರನು,
ಸ್ತನ್ಯವೂಡುತಲಿದ್ದ ತನ್ನ ಕಂದನ ಮೇಲೆ
ನೋಟವನು ಬಹುಕಾಲ ತಂಗಿಸಿದಳು.

—ಸುಭಾಷಿತಾವಲಿ, ೧೦೬೪.

# ಪಾಂಥ ವನಿತೆ

ಕಣ್ಣು ಹರಿಯುವ ತನಕ ತನ್ನ ನಲ್ಲನ ಹಾದಿ-
ಯನು ನೋಡಿ ನೋಡಿ ಖೇದವನು ತಳೆದು,
ಹಗಲು ಮುಗಿಯಲು, ಜನದ ಸುಳಿವಳಿದ ದಾರಿಯಲಿ
ಕವಿದು ಕತ್ತಲೆ ಹರಡಿಕೊಳ್ಳುತಿರಲು,
ಹೆಜ್ಜೆಯೊಂದನು ಶೋಕದಲಿ ಮನೆಯ ಕಡೆಗಿಟ್ಟು,—
ಈ ಕ್ಷಣದೊಳೇ ಬಂದನೇನೊ ಎಂದು
ಒಡನೆ ಕೊರಳನು ತಿರುಹಿ ಮತ್ತೆ ನೋಟವನತ್ತ
ಬೀರಿದಳು ಬೇಗ ದಾರಿಗನ ಮಡದಿ !

—ಅಮರು ಶತಕ, ೭೬.

* * *

ಬರೆವಳು ಗೆರೆಗಳನೆಣಿಸಳು, ತುಂಬಿದ
ಕಂಬನಿ ತೊಳೆಯಲು ಕೆನ್ನೆಯನು,
ಗಡುವಿನ ದಿವಸವು ತೀರಿತೊ ಏನೋ
ಎಂದಳುಕುತ ಬಾಲೆ.

—ಸುಭಾಷಿತಾವಲಿ, ೧೦೭೨.

* * *

" ಏಕಿಂತು ಬಡವಾದೆ, ಬಡನಡುವಿನವಳೆ ? "
" ಹೆರರ ಸುದ್ದಿಗಳೆಲ್ಲ ನಿನಗೇತಕೆ ? "
" ಇರಲಿರಲಿ, ಹೇಳದನು ನನ್ನ ಸಂತಸಕೆ."
" ದಾರಿಗನೆ, ಹೇಳುವಳು ನಿನ್ನ ಮಡದಿ."

—'ಕಿಮಿತಿ ಕೃಶಾಸಿ ಕೃಶೋದರಿ..'

## ಅಭಿಸಾರಿಕೆ

ಎದುರುಗಾಳಿಗೆ ಕುರುಳು ಕೆದರಿ, ತಿಲಕವು ತೊಡೆದು,
ಅಡಿಯರಗು ಹರಿದುಡಿಗೆ ಕೆಂಪು ಕದಡಿ,
ಕಾರ್ಮುಗಿಲ ಗುಡುಗಿಸಿಂದೆದೆ ಬೆಚ್ಚಿ, ಮುಖ ಕಂದಿ,
ಪ್ರಿಯನ ಮನೆಯೆಡೆಗೆಂತೊ ಬಂದು ಸೇರಿ—
ಮಳೆ ಚಚ್ಚುತಿದ್ದರೂ, ಬಾಗಿಲನು ತೆರೆಯೆಂದು
ಕೂಗಲೊಲ್ಲಳು ರಮಣಿ ನಾಚಿಕೆಯಲಿ;
ಕೆಸರುಗಟ್ಟಿದ ಕಾಲುಸರಗಳನು ಘಲ್ಲೆಂದು
ಸದ್ದುಮಾಡುತ ಹೊರಗೆ ನಿಂತಿರುವಳು.

—ಸುಭಾಷಿತಾವಳಿ, ೧೯೫೦.

* * *

" ಹಬ್ಬಿದಿರುಳೊಳಗೆಲ್ಲಿ ಹೊರಟಿರುವೆ, ಚೆಲುವೆ? "
" ನನ್ನ ಪ್ರಾಣಕೆ ಮಿಗಿಲಿನಿನಿಯನಿರುವೆಡೆಗೆ! "
" ಏಕಾಂಗಿ ನೀನೆಂತು ಹೆದರೆಯೆಲೆ ತರಳೆ? "
" ಸೋಗೆಯಂಬಿನ ಮದನನಿಲ್ಲವೇ ಜೊತೆಗೆ! "

—ಅಮರು ಶತಕ, ೭೧.

* * *

ತುರುಬಿಗೆ ಮಲ್ಲಿಗೆಮಾಲೆಯ ಮುಡಿದು,
ಅಂಗಕೆಲ್ಲ ಚಂದನವನು ತೊಡೆದು,
ಬಿಳಿ ಪಟ್ಟುಡೆಯುಟ್ಟಭಿಸಾರಿಕೆಯರು
ಚಂದ್ರಿಕೆಯೊಳಗೂ ಕಾಣಿಸರು.

—ಕಾವ್ಯಾದರ್ಶ, ೨-೨೧೫.

## ಹತಾಶೆ

ಮೊದಲು, ಬೇರ್ಪಡದೊಂದೆ ತನು ನಮಗೆಂಬ ರೀತಿಯಲಿದ್ದಿತು ;
ಬಳಿಕ, ನೀನೋ ಪ್ರಿಯನು, ನಾನು ಹತಾಶೆ ಪ್ರೇಯಸಿಯಾದೆನು.
ಈಗ, ನಾಥನು ನೀನು, ನಾನೋ ಮಡದಿ—ಇನ್ನೇನಾಚೆಗೆ !
ಪಡೆದೆ ನಾನಿದೊ ವಜ್ರಕರ್ಕಶವಾದ ಪ್ರಾಣದ ಫಲವನು !

—ಅಮರು ಶತಕ, ೬೯.

* * *

ಪ್ರೇಮಪಾಶದ ಕಟ್ಟು ಕಳಚಲು, ಪ್ರಣಯಗೌರವವಿಳಿಯಲು,
ಋಜುತೆ ತೊಲಗಲು, ಮಂದಿ ನಡೆದಂತವನು ನನ್ನಲಿ ನಡೆಯಲು ;
ಇದನು ಪ್ರಿಯಸಖಿ, ನೋಡಿ ನೋಡಿ, ನೆನೆದು ಕಳೆದಾ ದಿನಗಳ—
ಅರಿಯೆನೇತಕೆ ಸೀಳದಿಹುದೋ ನೂರು ಪಾಲಿಗೆ ಹೃದಯವು !

—ಅಮರು ಶತಕ, ೪೩.

* * *

"ಇದು ಕಪ್ಪಲ್ಲವೆ?" "ಕರಿಯದು"; "ಇನಿಯಾ ಬಿಳುಪಲ್ಲವೆ?" "ಅಹುದು."
"ನಡೆಯುವ ಮುಂದಕೆ" "ಹೊರಡುವ"; "ನಡೆದುದು ಸಾಕ್ಕೈ" " ಸರಿ,
[ಸಾಕು."
ಮೊದಲಿಂತೆನ್ನೀ ಮನಸನು ಬಹುದಿನ ಯಾರನುಸರಿಸಿದನೋ
ಅವನೇ ಹೆರರಂತಾದನು ; ಎಲೆ ಸಖಿ, ಪುರುಷರೊಳುಂಟೆ ಕೆಳೆ !

—ಅಮರು ಶತಕ, ೯೪.

# ವಿರಹಿ

ಸ್ವಾಧೀನೆಯಿರುವಳೆನುತ ಚದುರು ಮುತ್ತಿಡಲಿಲ್ಲ,
ಆಸೆಗೊಂಡವಳ ತುಟಿಯೀಂಟಲಿಲ್ಲ,
ಅವಳ ನಗೆನಡೆಗಳನು ಮೆಚ್ಚಿ ನಿರುಕಿಸಲಿಲ್ಲ,
ಒಲುಮೆಯಲಿ ಹಿಡಿದವಳನಪ್ಪಲಿಲ್ಲ,
ನಲ್ಲೆ ಮುನಿಸಾಂತರೂ ಒಲಿಸಿ ಸಂಜಿಸಲಿಲ್ಲ ;
—ಮುಚ್ಚಿದುದು ನನ್ನನೀ ತೆರದ ಮರುಳು.
ಅಷ್ಟರೊಳಗೇ ದುಷ್ಟವಿಧಿಯೆಂತು ನನಗಿಂತು
ವಿರಹವಿದನೊಡ್ಡಿದನೊ, ಗೆಳೆಯ, ತಿಳಿಯೆ !

—ಸುಭಾಷಿತಾವಲಿ, ೧೩೭೦.

* * *

ಕೋಪದಲಿ ಮೊಗದಿರುಹಿ ಮನದನ್ನೆ ಕನಸಿನಲಿ ಕಾಣಿಸಿದಳಿಂದು ನನಗೆ :
ಬೇಡ, ಮುಟ್ಟದಿರೆನ್ನನೆಂದವಳು ರೋದಿಸುತ ಹೊರಡಲುಜ್ಜುಗಿಸುತಿರಲು,
ಬಿಗಿಯಪ್ಪಿ ಹಲವು ಸವಿನುಡಿಗರೆದು ನಲ್ಲೆಯನು ನಾನು ನಂಬಿಸುವ [ಮೊದಲೆ
ಗೆಳೆಯ, ಕರುಬುವ ದುರುಳ ವಿಧಿ ನನ್ನ ನಿದ್ದೆಯನೆ ಭಂಜಿಸಿದನಷ್ಟರೊಳಗೆ.

—ಸುಭಾಷಿತಾವಲಿ, ೧೩೬೩.

* * *

ತಪ್ಪಿದಾಗಗಲಿಸುವುದಿಬ್ಬರನು ಎಂದಳುಕಿ
ಸರವನೂ ಕೊರಳಿನಲಿ ಧರಿಸೆನೆಂದು,
ಹಬ್ಬಿಹುದು ಪರ್ವತವು, ಹರಡಿಹುದು ಹೇರಡವಿ,
ಹರಿಯುವುದು ಹೊಳೆ ನಮ್ಮ ನಡುವೆ ಇಂದು !

—ಸುಭಾಷಿತಾವಲಿ, ೧೧೯೩.

* * *

ಇರಲಿ ದೀವಿಗೆ, ಬೆಂಕಿ, ತಾರಗೆ, ಇರಲಿ ಚಂದ್ರನು, ಮಣಿಗಳು ;
ಹುಲ್ಲೆಗಣ್ಣವಳಳಿಯಲೀ ಜಗವೆಲ್ಲ ಕತ್ತಲೆಯಾಯಿತು !

—ಸುಭಾಷಿತಾವಲಿ, ೧೨೩೫.

*　　*　　*

ನಲ್ಲೆಯಿರುವೆಡೆಯಿಂದ ಬೀಸಿತ್ತ, ಗಾಳಿ,
ಸೋಕುತವಳನು ಬಂದು ಸೋಕು ನನಗೆ.
ಪ್ರಣಯಕಾತರನಿಗಿದೆ ಹಿರಿಯುದೊಂದೊಸಗೆ ;
ಧರಿಸಬಹುದಿದರಿಂದ ಜೀವಿತವನು.

—ಸುಭಾಷಿತಾವಲಿ, ೧೧೯೦.

*　　*　　*

ಮರುಳರು ಸಂಗಮವನು ಕೋರುವರು ;
ವಿರಹವೆ ನನಗಿರಲಿ :
ಪ್ರಿಯೆ ಒಬ್ಬಳೆ ಸಂಗಮದಲಿ ; ಜಗವೇ !
ತನ್ಮಯವಪ್ಪುದು ವಿರಹದಲಿ !

—ಸುಭಾಷಿತಾವಲಿ, ೧೨೪೯.

*　　*　　*

ವಿರಹವದೂ ಸಂಗಮವಹುದು
ಮನಸೊಂದೊಂದನು ಹೊಂದಿರಲು ;
ಹೃದಯಗಳೆರಡೂ ಒಡೆದಿರಲು
ಸಂಗವು ವಿರಹಕೆ ಮಿಗಿಲಹುದು !

—ಶೃಂಗಾರ ಶತಕ, ೮೭.

# ಸಂಕೀರ್ಣ

ಏನು ಮೆಚ್ಚಿಕೆ ನನಗೆ, ಅದನೇ ನಲ್ಲೆಯೆನಗುವಳೆನುವನು ;
ಏನನವಳೆನಗುವಳೊ, ಅದೆ ಅದೆ ಮೆಚ್ಚು ತನಗೆಂದರಿಯನು !

—'ಯದೇವ ರೋಚತೇ ಮಹ್ಯಂ..'

*  *  *

ಹಸೆಮಣೆ ವಧುವನು ವರನೇಕಾಂತದ
ಭುಜಪಂಜರದಲಿ ಸೆರೆಗೊಳಲು,
ಬಲೆಯಲಿ ಬಿದ್ದೆಳಹುಲ್ಲೆಯ ತೆರದಲಿ
ಗಡಗಡ ನಡುಗುವಳು.

—'ಭುಜಪಂಜರೇ ಗೃಹೀತಾ..'

*  *  *

ತುಟಿಯಲಿ ಹೊಸ ತಾಂಬೂಲದ ಕೆಂಪು,
ಕಣ್ಣಲಿ ಕಾಡಿಗೆ, ದುಗುಲದ ಸೊಂಪು,—
ಇದೆ ಆಭರಣವು ಸುಂದರಿಯರಿಗೆ ;
ಉಳಿದೊಡವೆಯು ಹೊರೆ ಕರೆ ಮೈಗೆ.

—'ಅಧರೇ ನವವೀಟಿಕಾನುರಾಗಃ..'

*  *  *

ಎದುರಿಗಿಲ್ಲದಿರಲು ನೋಡುವಷ್ಟೆ ಹಂಬಲು,
ನೋಡಿದಾಗ ಕೂಡುವೊಂದೆ ಸುಖದ ಕೋರಿಕೆ,
ಸೇರೆಗಣ್ಣ ಸತಿಯನಪ್ಪಿಕೊಂಡ ಬಳಿಕವೋ
ದೇಹವೆರಡು ಒಂದೆ ಆಗಲೆಂದು ಬಯಸುವೆ !

—ಶೃಂಗಾರ ಶತಕ, ೭೧.

# ಗಾಥಾಸಪ್ತಶತಿಯಿಂದ

(ಸಾಂಗತ್ಯದ ಧಾಟಿ)

ಎನಿತೊಲವನು ಕೊನೆತನಕ ನೀನಿಡಬಲ್ಲೆ,
ಅನಿತನೆ ಸಲಿಸು ನೀನೆನಗೆ.
ಇತ್ತ ಪ್ರೇಮವ ಕಿತ್ತುಕೊಳಲು ದುಃಖವ ನುಂಗಿ
ಸಹಿಸಲೆಲ್ಲರು ಶಕ್ತರಲ್ಲ. (೧-೭೧)

* * *

ಇನ್ನೂ ಬಾಲಕನೆಮ್ಮ ಗೋಪಾಲನೆಂದೆಂದು
ಬಣ್ಣಿಸುತಿರಲು ಯಶೋದೆ,
ಕೃಷ್ಣನ ಕಡೆಗೊಮ್ಮೆ ನೋಡಿ, ತಮ್ಮೊಳು ತಾವು
ವ್ರಜವಧುಗಳು ನಗುತಿಹರು. (೨-೧೨)

* * *

ಮೇಲಕೆ ಕಣ್ಣೆತ್ತಿ ಬೆರಳನು ವಿರಳಿಸಿ
ತಡೆದು ದಾರಿಗ ನೀರ ಕುಡಿದಂತೆಲ್ಲ,
ಅರವಟ್ಟಿಗೆಯ ಬಾಲೆ ಕಿರು ಜಲಧಾರೆಯ-
ನಿನ್ನೂ ಕಿರಿದುಮಾಡಿ ಬಿಡುತಿಹಳು. (೨-೬೧)

* * *

ಎದುರಾಗಿ ಹಾಯಿಸಿ ಮರಳಿಸಿ ಹೊರಳಿಸಿ
ನಲ್ಲೆ ಬೀರುವ ಕಣ್ಣ ಮಿಂಚುಗಳೆ
ಮದನನ ಬಾಣಗಳೆಮಗೆ; ಮಿಕ್ಕವರಿಗೆ
ಯಾವುವು ಬೇಕಾದರವೆ ಆಗಲಿ. (೩-೧೦)

* * *

ನಗೆಯಿಂದ ಮೂದಲೆ, ಮಿಗಿಲಿನಾದರದಿಂದ
ಇರಿಯುವ ಸಂಕಟವು,
ಇಳಿವ ಕಂಬನಿಯಿಂದ ಕಲಹವು—ಪದ್ಧತಿ
ಇದು ಕುಲಸತಿಯರಿಗೆ. (೬-೧೩)

* * *

ಮಾವಿನ ಕುಡಿ ಕಾಣಲಿಲ್ಲವಿನ್ನೂ, ಅತ್ತೆ,
ಮಲಯಮಾರುತವಿನ್ನೂ ಸುಳಿಯಲಿಲ್ಲ.
ಬಂದಿತು ಮಧುಮಾಸವೆಂದು ಸಾರುವುದಿಂದು
ಹೊಮ್ಮಿದುತ್ಸುಕತೆ ತಾನೆ. (೬-೪೨)

* * *

ಏನೇನು ಸೊಗಸದೊ ನಿನಗದನೆಸಗೆನು—
ನನ್ನ ಕೈಯೊಳಗಿರುವುದನು ;
ನಾನೇ ಸೊಗಸದವಳಾದರೆ, ಎಲೆ ಚೆನ್ನ,
ಅದು ನನ್ನ ಕೈಯೊಳಗಿಹುದೆ? (೭-೧೫)

* * *

ಇಳಿಹಗಲಲ್ಲಿ ಬಂದಳಿಯನ ಮೋಹದ
ಬಯಕೆಯನಿಮ್ಮಡಿಸುವುದು—
ಒಳಮನೆಯಲಿ ತನ್ನ ವಧು ನೀರುಮೀಯುವ-
ಳೆಂದು ಸಾರುವ ಬಳೆ ಸದ್ದು. (೭-೮೩)

# ಗ್ರೀಕಿನಿಂದ

ಮುಳುಗಿದನು ಚಂದಿರನು, ಕೃತ್ತಿಕೆಯರಡಗಿದರು,
ಸರಿಹೊತ್ತು ಮೀರಿರುವುದಿರುಳಿನಲ್ಲಿ,
ಕಳೆದು ಹೋಗುತಲಿಹುದು ವೇಳೆ; ನಾನೊಬ್ಬಳೇ
ಹೊರಳುವೆನು ಶಯನದಲ್ಲಿ!

—ಸಾಫೊ.

*   *   *

ತಾರೆಗಳ ನಿಟ್ಟಿಸುವೆ, ನಲ್ಲೆ?—
ನಾನೆ ಆ ಬಾನಾಗೆನೇ:
ಕೋಟಿ ತಾರಗೆ ಕಣ್ಣು ತುಂಬ
ನಿಟ್ಟಿಸುವುದಕೆ ನಿನ್ನನೇ!

—ಪ್ಲೇಟೊ.

# ಕಣ್ಣು

ಇರುಳಿಗೆ ಸಾವಿರ ಕಣ್ಣುಗಳಿರುವುವು,
ಒಂದೇ ಹಗಲಿಗದು.
ಮೆರವಿಳೆಯಲಿ ಬೆಳಕಳಿವುದು ಮತ್ತೆ
ಕುಂದುವ ರವಿಯೊಡನೆ.

ಸಾವಿರ ಕಣ್ಣುಗಳಿರುವುವು ಮತಿಗೆ,
ಹೃದಯಕೆ ತಾನೊಂದೇ.
ಜೀವನದೆಲ್ಲಾ ಬೆಳಕಳಿಯುವುದು
ಎದೆಯೊಲವಳಿದಿರಲು.

—ಬೂರ್ಡಿಲಾನ್ : *The night has a thousand eyes.*

# ಹೆಸರು

ಸುಖದ ದಿವಸವೊಂದರಲ್ಲಿ ನುಡಿದೆ ನನ್ನ ಚೆನ್ನೆಗಿಂತು :
ಬೆಸಸು, ನನ್ನ ಕವನದಲ್ಲಿ ನಿನ್ನ ಕರೆವ ಹೆಸರದೆಂತು—
ಕಾವ್ಯಗಳಲಿ ಮೆರೆವ ಯಾವ ಸವಿಯ ಹೆಸರದು ?
ಇಂದುಮತಿಯೆ, ಶಕುಂತಲೆಯೆ,
ಕಾದಂಬರಿಯೆ, ಯಶೋಧರೆಯೆ,
ಉಷೆಯೆ, ಉಮೆಯೆ, ರಮೆಯೆ—ಯಾವ ಹೆಸರನಿಡುವುದು ?

ಬಳಿಕ ನನ್ನ ಕೋಮಲಾಂಗಿಯಿತ್ತಳಿಂತು ಮಾರುನುಡಿಯ :
ಹೆಸರಿನೊಳಗೆ ಯಾವ ಭಾಗ್ಯವುಂಟು ? ಬರಿಯ ಬಯಲು, ಇನಿಯ—
ಹಾಡಿಗೊಪ್ಪುವಂತೆ ಜೋಡಿಸೊಂದು ಹೆಸರನು.
ಇಂದುಮತಿಯೊ, ಕಾದಂಬರಿಯೊ,
ಉಷೆಯೊ—ತಿಳಿದ ಹೆಸರ ಕರೆಯೊ ;
ಒಂದೆ ಮಾತು : ನಿನ್ನಳೆಂದು ಕರೆಯೊ ನನ್ನನು !

—ಕೋಲ್‌ರಿಜ್ : *I asked my fair one happy day.*

